KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೮, ೨೦೦೭ (ಆಶ್ವಯುಜ ೨೬, ಶಕ ವರ್ಷ ೧೯೨೯) | ಸಂಚಿಕೆ ೪೨ |
|---|---|---|

## ಭಾಗ–೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೆ.ಎನ್.ರಾಮದಾಸ್, ಪಿಸಿ–639, ಸಿಎಆರ್ ಕೇಂದ್ರಸ್ಥಾನ ಬೆಂಗಳೂರು ಇವರ ಸೇವೆಯ ಹೊರಗಿನ ಕಾಲವನ್ನು ಕರ್ತವ್ಯವೆಂದು ಪರಿಗಣಿಸುವ ಬಗ್ಗೆ – ಆದೇಶ.

**ಉಲ್ಲೇಖ:** 1) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 376/2000, ದಿನಾಂಕ:31–07–2002.

2) ಶ್ರೀ ಕೆ.ಎಸ್.ರಾಮದಾಸ್, ಪಿಸಿ–639, ಇವರ ಮನವಿ ದಿನಾಂಕ:25–10–2002.

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:102/ಸಿಬ್ಬಂದಿ–4/2000–01 ದಿನಾಂಕ:22–10–2003 ಮತ್ತು 18–04–2006.

4) ಸರ್ಕಾರದ ಕಾರಣ ಕೇಳುವ ನೋಟೀಸಿನ ಸಂಖ್ಯೆ:ಒಇ 385 ಪೊಸಿಅ 2006, ದಿನಾಂಕ:17–10–2006.

**ಪ್ರಸ್ತಾವನೆ:**

ಶ್ರೀ ಕೆ.ಎನ್.ರಾಮದಾಸ್, ಎಪಿಸಿ–639 ರವರು ಸಿಎಆರ್, ಕೇಂದ್ರ ಬೆಂಗಳೂರು ಇವರು ದಿ:14–02–80 ರಿಂದ 17–02–80 ರವರೆಗೆ ಪರಿವೀಕ್ಷಣೆ ಅವಧಿಯಲ್ಲಿರುವಾಗಲೇ 4 ದಿವಸಗಳು ಅನಧಿಕೃತ ಗೈರು ಹಾಜರಾಗಿದ್ದಕ್ಕೆ ಶಿಸ್ತು ಪ್ರಾಧಿಕಾರಿಯು ಶ್ರೀ ರಾಮದಾಸ್ ರವರನ್ನು ನಿಯಮ 1977ರ ನಿಯಮ (6)ರಡಿ ಸೇವೆಯಿಂದ ವಜಾಗೊಳಿಸಿದ್ದಾರೆ.

ದಿ:29–02–1980ರ ವಜಾಗೊಳಿಸಿದ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ದಿ:10–05–1991ರಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಸರ್ಕಾರವು ಅರ್ಜಿದಾರರ ಮನವಿಯನ್ನು ಮಾನವೀಯತೆಯ ನೆಲೆಯಲ್ಲಿ ಪರಿಶೀಲಿಸಿ, ದಿ:29–04–1992ರಲ್ಲಿ ಸೇವೆಗೆ ಪುನರ್ ಸ್ಥಾಪಿಸಿದ್ದಾರೆ. ಈ ಆದೇಶದಲ್ಲಿ ಇವರು ಪರಿವೀಕ್ಷಣಾ ಅವಧಿಯಲ್ಲಿ ದಿ:14–02–80 ರಿಂದ 17–02–80 ರವರೆಗೆ 4 ದಿವಸಗಳು ಅನಧಿಕೃತ ಗೈರುಹಾಜರಾದ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆ ಎಂದು ಪರಿಗಣಿಸಿ ಸೇವೆಯಿಂದ ವಜಾಗೊಂಡು ದಿ:29–02–80 ರಿಂದ ಸೇವೆಗೆ ಪುನರ್ ನೇಮಕಗೊಂಡ ಅವಧಿಯ ಅಂದರೆ ದಿ:29–04–92ರ ವರೆಗಿನ ಅವಧಿಯನ್ನು ಕರ್ತವ್ಯ ರಹಿತ ಅವಧಿ (Dies non) ಎಂದು ಪರಿಗಣಿಸಿ ಆದೇಶ ಹೊರಡಿಸಿದೆ. ಅದರಂತೆ ಸದರಿಯವರು ದಿ:30–05–1992 ರಂದು ಕರ್ತವ್ಯಕ್ಕೆ ತೆಗೆದುಕೊಳ್ಳಲಾಗಿದೆ.

ದಿ:29–04–92ರ ಸರ್ಕಾರದ ಆದೇಶದ ವಿರುದ್ಧ ಸದರಿ ನೌಕರ ಕೆ.ಎ.ಟಿ.ಯಲ್ಲಿ ಅರ್ಜಿ ಸಂ.376/2000ನ್ನು ದಾಖಲು ಮಾಡಿದ್ದು, ಕೆ.ಎ.ಟಿ. ದಿ:31–07–02 ತೀರ್ಪಿನಲ್ಲಿ ಸರ್ಕಾರ ಆದೇಶ ಹೊರಡಿಸುವ ಸಂದರ್ಭದಲ್ಲಿ ಅರ್ಜಿದಾರರಿಗೆ ನೋಟೀಸು ನೀಡಿರುವುದಿಲ್ಲ (KCSR ನಿಯಮ 100 ರಂತೆ) ಆದ್ದರಿಂದ ಸದರಿ ಅವಧಿಯನ್ನು ಪೂರ್ಣ ವೇತನ ರಜೆ ಅಥವಾ ಅರ್ಧ ವೇತನ ರಜೆ ಎಂದು ಪರಿಗಣಿಸುವ ತೀರ್ಪು ನೀಡಿದೆ. ಡಿಜಿ ಮತ್ತು ಐಜಿಪಿ ಬೆಂಗಳೂರು ದಿ:24–04–06ರ ಪತ್ರದಲ್ಲಿ ನಿಯಮ 100 ರಂತೆ ಸರ್ಕಾರ ಆದೇಶ ಹೊರಡಿಸಿಲ್ಲವಾದ್ದರಿಂದ ಕೆ.ಎ.ಟಿ. ತೀರ್ಪಿನಂತೆ ಅರ್ಜಿದಾರರಿಗೆ ನಿಯಮ 100 ರಂತೆ ನೋಟೀಸು ಜಾರಿ ಮಾಡಿ ನಂತರ ಆದೇಶ ಹೊರಡಿಸಲು ಅದು ಸಾಧ್ಯವಿಲ್ಲದ ಪಕ್ಷದಲ್ಲಿ ಪೂರ್ವ ವೇತನ ರಜೆ ಅಥವಾ ಅರ್ದ ವೇತನ ರಜೆ ಎಂದು ಪರಿಗಣಿಸಿ ಆದೇಶ ಹೊರಡಿಸಲು ಕೋರಿದ್ದಾರೆ.

ಪರಿಶೀಲಿಸಲಾಗಿ, ಶ್ರೀ ಕೆ.ಎನ್.ರಾಮದಾಸ್, ಐಪಿಸಿ–639 ರವರು 1979ರಲ್ಲಿ ಪೊಲೀಸ್ ಪೇದೆಯಾಗಿ ನೇಮಕಾತಿ ಹೊಂದಿದ್ದಾರೆ. ಇವರು ಪರಿವೀಕ್ಷಣಾ ಅವಧಿಯಲ್ಲಿರುವಾಗಲೇ ತಮ್ಮ ಮೇಲಾಧಿಕಾರಿಗಳ ಪೂರ್ವಾನುಮತಿ ಪಡೆಯದೆ

ದಿ:14–02–80 ರಿಂದ 17–02–80 ರವರೆಗೆ 4 ದಿವಸಗಳು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದಾರೆ. ನಿಯಮಾನುಸಾರ ಶಿಸ್ತು ಪ್ರಾಧಿಕಾರಿಯು ಸದರಿಯವರನ್ನು ದಿ:29–02–80 ರಲ್ಲಿ ಸೇವೆಯಿಂದ ವಜಾಗೊಳಿಸಿದ್ದಾರೆ.

ಈ ರೀತಿ ಸೇವೆಯಿಂದ ವಜಾಗೊಳಿಸಿದ ಆದೇಶದ ವಿರುದ್ಧ ಶ್ರೀ ರಾಮದಾಸ್ ರವರು ಸರ್ಕಾರಕ್ಕೆ 11 ವರ್ಷಗಳ ದೀರ್ಘ ಕಾಲಾವಧಿಯ ನಂತರ ಸರ್ಕಾರಕ್ಕೆ ದಿ:10–05–91ರಲ್ಲಿ ಮೇಲ್ಮನವಿ ಸಲ್ಲಿಸಿದ್ದಾರೆ. ಸರ್ಕಾರ ಅರ್ಜಿದಾರರ ಮನವಿಯನ್ನು ಸಹಾನುಭೂತಿಯಿಂದ ಪರಿಶೀಲಿಸಿ ಮಾನವೀಯತೆಯ ದೃಷ್ಟಿಯಿಂದ ಅರ್ಜಿದಾರರನ್ನು ಸರ್ಕಾರದ ಆದೇಶ ದಿ:24–09–92ರಲ್ಲಿ ಸೇವೆಗೆ ಪುನರ್ ನೇಮಕ ಮಾಡಿ ಅವರು ಕರ್ತವ್ಯದಿಂದ ಹೊರಗುಳಿದ ಅವಧಿ ದಿ:29–02–80 ರಿಂದ 29–09–92 ರವರೆಗಿನ ಅವಧಿಯನ್ನು ಕರ್ತವ್ಯದ ಹೊರಗುಳಿದ ಅವಧಿ ಎಂದೇ ಪರಿಗಣಿಸಿದೆ.

ಈ ಆದೇಶ ಹೊರಡಿಸಿದ ನಂತರ ಅರ್ಜಿದಾರರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ಕೂಡಾ ತತ್‌ಕ್ಷಣದಲ್ಲಿ ಅರ್ಜಿ ಸಲ್ಲಿಸದೇ ಸುಮಾರು 8 ವರ್ಷಗಳ ನಂತರ ಕೆ.ಎ.ಟಿ.ಯಲ್ಲಿ ಅರ್ಜಿ ಸಲ್ಲಿಸಿದ್ದಾರೆ. ಇಲ್ಲಿಯೂ ಕೂಡಾ ಇವರು ತುಂಬಾ ವಿಳಂಬ ನೀತಿಯನ್ನು ಅನುಸರಿಸಿದ್ದಾರೆ.

ಈ ರೀತಿ ಅರ್ಜಿದಾರರು ತಮಗೆ ಬೇಕೆನಿಸಿದಾಗ ಸರ್ಕಾರಕ್ಕೆ ಹಾಗೂ ಕೆ.ಎ.ಟಿ.ಗೆ ಅರ್ಜಿಗಳನ್ನು ಸಲ್ಲಿಸಿದ್ದಾರೆ. ಇದರಿಂದಲೇ ಇವರ ಕರ್ತವ್ಯ ನಿಷ್ಠೆ ಹಾಗೂ ಕರ್ತವ್ಯ ಪ್ರಜ್ಞೆ ಎಷ್ಟಿದೆ ಎಂದು ಗೊತ್ತಾಗುತ್ತದೆ. ತಮ್ಮನ್ನು ಸೇವೆಯಿಂದ ವಜಾಗೊಳಿಸಿದ ಆದೇಶದ ವಿರುದ್ಧ ಸುಮಾರು 11 ವರ್ಷಗಳ ನಂತರ ಸರ್ಕಾರಕ್ಕೆ ಅರ್ಜಿ ಸಲ್ಲಿಸಿದ್ದು, ಇದಕ್ಕೆ ಅರ್ಜಿದಾರರೇ ಹೊಣೆಯೇ ಹೊರತು ಸರ್ಕಾರವಲ್ಲ ಇವರು ಸೇವೆಯಿಂದ ವಜಾಗೊಂಡು ತಮಗೆ ಕೆಲಸ ಬೇಕೆನಿಸಿದಾಗ ಮತ್ತು ಉದಾಸೀನತೆ, ಅಸಡ್ಡೆಯಿಂದ ಹಲವು ವರ್ಷಗಳ ನಂತರ ಸರ್ಕಾರಕ್ಕೆ ಅರ್ಜಿ ಸಲ್ಲಿಸಿ ಸುಮಾರು 11 ವರ್ಷ ಸರ್ಕಾರದಲ್ಲಿ ಯಾವ ರೀತಿಯ ಸೇವೆಯನ್ನು ಸಲ್ಲಿಸದೆಯೇ ಪೂರ್ಣ ವೇತನ ರಜೆ ಅಥವಾ ಅರ್ಧ ವೇತನ ರಜೆ ಎಂದು ಪರಿಗಣಿಸಲು ಕೋರಿದ್ದು, ನ್ಯಾಯ ಸಮ್ಮತವಲ್ಲ, ಅರ್ಜಿದಾರರಿಗೆ ಮಾನವೀಯತೆಯಿಂದ ಸೇವೆಗೆ ಪುನರ್ ನೇಮಕ ಮಾಡಲಾಗಿದೆಯೇ ಹೊರತು ಅವರ ಕರ್ತವ್ಯ ಪ್ರಜ್ಞೆ ನಿಷ್ಠೆಯಿಂದ ಕೆಲಸ ನಿರ್ವಹಿಸಿರುತ್ತಾರೆ ಎಂದು ಆದರೂ ಅರ್ಜಿದಾರರ ಮನವಿಯನ್ನು ಪರಿಶೀಲಿಸಿ, ಇಲಾಖೆಯ ಸಹಮತಿ ಪಡೆದು, 1980ರಲ್ಲಿ ಸೇವೆಯಿಂದ ವಜಾಗೊಂಡಿದ್ದರೂ 1991ರವರೆಗೆ ಸರ್ಕಾರಕ್ಕೆ ಮನವಿ ಸಲ್ಲಿಸದಿರುವ ವಿಳಂಬಕ್ಕೆ ಕಾರಣಗಳನ್ನು ತಿಳಿಸುವಂತೆ ದಿನಾಂಕ:17–10–2006ರಂದು ಕಾರಣ ಕೇಳುವ ನೋಟೀಸನ್ನು ಹೊರಡಿಸಲಾಗಿತ್ತು. ಆ ನೋಟೀಸಿಗೂ ಸಹ ಇದುವರೆಗೂ ಉತ್ತರ ನೀಡಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸಿದ್ದು, ಸಮಯ ಪಾಲನೆ, ಶಿಸ್ತು, ಜವಾಬ್ದಾರಿಯುತ, ಕರ್ತವ್ಯ ಪ್ರಜ್ಞೆ ಇಲ್ಲದಿರುವುದನ್ನು ಗಮನಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 385 ಪೊಸಿಅ 2006 ಬೆಂಗಳೂರು ದಿನಾಂಕ:17–03–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಕೆ.ಎನ್.ರಾಮದಾಸ್, ಪಿಸಿ–639, ಸಿಎಆರ್, ಕೇಂದ್ರಸ್ಥಾನ ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:25–10–2002ರ ಮನವಿಯನ್ನು ಸರ್ಕಾರವು ತಿರಸ್ಕರಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 365 ವೆಚ್ಚ–6 2005, ದಿನಾಂಕ:25–05–2005ರ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 637

**ವಿಷಯ:** ಶ್ರೀ ಎಸ್.ಲಕ್ಷ್ಮಣರಾವ್, ಎಆರ್‌ಎಸ್‌ಐ., `ಎ` ವಿಭಾಗ ಸಿಎಆರ್ (ಕೇಂದ್ರ) ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಓದಲಾಗಿದೆ.** 1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ, ಕೇಂದ್ರ ಬೆಂಗಳೂರು, ಇವರ ಆದೇಶ ಸಂಖ್ಯೆ:253:ಶಿಕ್ಷೆ:2002–03, ದಿನಾಂಕ:27–06–2003 ಮತ್ತು 08–07–2003.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್ ಇವರ ಆದೇಶ ಸಂಖ್ಯೆ:53/ಅಪೀಲು/2003–04, ದಿನಾಂಕ:21–06–2004.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 06–05–2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)79/2005, ದಿನಾಂಕ:08–12–2005.

**ಪ್ರಸ್ತಾವನೆ:**

ಶ್ರೀ ಎಸ್.ಲಕ್ಷ್ಮಣರಾವ್, ಎಆರ್‌ಎಸ್‌ಐ 'ಎ' ವಿಭಾಗ, ಸಿಎಆರ್ (ಕೇಂದ್ರ) ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ**

''ದಿನಾಂಕ:11/12–09–2003 ರಂದು ರಾತ್ರಿ ಗಸ್ತು ಸಮಯದಲ್ಲಿ ಸುಮಾರು 12–05ರ ಸಮಯದಲ್ಲಿ ಆರ್.ಬಿ.ಐ. ಕಾವಲು ದಳದಲ್ಲಿ ಸರಿಯಾಗಿ ಕರ್ತವ್ಯ ಮಾಡದೆ ನಿದ್ರಿಸುತ್ತಿದ್ದು, ಕರ್ತವ್ಯ ಲೋಪ ನಿರ್ಲಕ್ಷತೆಯಿಂದ ವರ್ತಿಸಿದ್ದು, ನೀವು ಇತರೆ ಸಿಬ್ಬಂದಿಗಳಿಗೆ ಕರ್ತವ್ಯದ ಬಗ್ಗೆ ತಿಳುವಳಿ ನೀಡುವ ಅಧಿಕಾರಿಗಳೇ ಈ ರೀತಿ ನಿರ್ಲಕ್ಷತೆ ತೋರಿಸಿದರೆ ಹಾಗೂ ಬೇರೆ ದುಷ್ಕರ್ಮಿಗಳು ಪೋಲೀಸ್ ವಾಹನದಲ್ಲಿ ಬಂದು ಅನಾಹುತ ಮಾಡುವ ಸಂಭವವಿರುತ್ತದೆ. ಆದುದರಿಂದ ನೀವು ಆರ್.ಬಿ.ಐ. ಕಾವಲು ದಳದಲ್ಲಿ ನಿರ್ಲಕ್ಷತೆ ಹಾಗೂ ಕರ್ತವ್ಯ ಲೋಪವೆಸಗಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣೆ ಪತ್ರ ಹೊರಡಿಸಿ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ನಗರ ಸಶಸ್ತ್ರ ಮೀಸಲು ಮೀಸಲು ಪಡೆ, ಕೇಂದ್ರ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:27–06–20034 ಮತ್ತು 08–07–2003ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಲಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:21–06–2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮಗೆ ವಹಿಸಿದ ಕೆಲಸದಲ್ಲಿ ನಿರತರಾಗಿರದೆ ಕರ್ತವ್ಯ ಲೋಪ ಎಸಗಿರುವುದು ಸಾಬೀತಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 5 ಪೊಸಿಅ 2006 ಬೆಂಗಳೂರು ದಿನಾಂಕ:24–03–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಲಕ್ಷ್ಮಣರಾವ್, ಎಆರ್ಎಸ್ಐ, `ಎ` ವಿಭಾಗ, ಸಿಎಆರ್(ಕೇಂದ್ರ) ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:06–05–2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 636

**ವಿಷಯ:** ಶ್ರೀ ಶಾಂತಿಪ್ರಸಾದ್, ಪಿಸಿ–4035, ವಿಜಯನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಉಲ್ಲೇಖ:**
1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಪೂರ್ವ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/ಆರ್–6/40/1992, ದಿನಾಂಕ:13–04–2000.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರ ಆದೇಶ ಸಂಖ್ಯೆ:29/ಅಪೀಲು/2000 ಓಬಿ ಸಂಖ್ಯೆ:347/2002, ದಿನಾಂಕ:15–03–2002.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 30–06–2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/85/2005, ದಿನಾಂಕ:18–03–2006.
4) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC 182 CNS 2006, ದಿನಾಂಕ:19–02–2007.

**ಪ್ರಸ್ತಾವನೆ:**

ಶ್ರೀ ಶಾಂತಿಪ್ರಸಾದ್ ಪಿಸಿ–4035, ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

''ಶ್ರೀ ಶಾಂತಿಪ್ರಸಾದ್, ಪಿಸಿ-4035, ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆ, ಆದ ನೀವು ದಿನಾಂಕ:23-05-1992ರಂದು ಶ್ರೀ ಜಿ.ನರಸಿಂಹಮೂರ್ತಿ, ಇವರಿಗೆ ಏಕಾಏಕಿ ಹೊಡೆದು, ನಿರ್ಲಕ್ಷತೆ, ಬೇಜವಾಬ್ದಾರಿತನದಿಂದ ಅಸಭ್ಯ ರೀತಿಯಿಂದ ವರ್ತಿಸಿದ್ದು, ಈ ಬಗ್ಗೆ ವಿಜಯನಗರ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ:300/92 ಕಲಂ 324, IPC ರಡಿಯ ಕ್ರಿಮಿನಲ್ ಕೇಸಿನಲ್ಲಿ ಭಾಗಿಯಾಗಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಪೂರ್ವ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:13-04-2000ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಅವರ ಹುದ್ದೆಯ ಕನಿಷ್ಟ ಮಟ್ಟಕ್ಕೆ ಇಳಿಸಿ ಅಲ್ಲಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿಗಳಿಸಲು ಹಾಗೂ ಅಮಾನತ್ತಿನ ಅವಧಿ ದಿನಾಂಕ:23-05-1992 ರಿಂದ 15-10-1992 ರವರೆಗೆ ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:15-03-2002ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಾವು ಚಾಕುವಿನಿಂದ ಚುಚ್ಚಿ ಗಲಾಟೆ ಮಾಡಿರುವುದೂ, ನಡೆದ ಘಟನೆಯನ್ನು ಮರೆತು, ಅವರೊಂದಿಗೆ ರಾಜಿ ಮಾಡಿಕೊಂಡಿರುತ್ತೇನೆಂದು ತಿಳಿಸಿರುವುದೂ, ತಾನೇ ಚಾಕುವಿನಿಂದ ಚುಚ್ಚಿ ಹೊಡೆದು ರಕ್ತ ಗಾಯ ಪಡಿಸಿರುವುದಾಗಿ ತಿಳಿಸಿ, ಕೃತ್ಯಕ್ಕೆ ಬಳಸಿದ ಚಾಕುವನ್ನು ಹಾಜರುಪಡಿಸಿರುವುದೂ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ, ಹಾಗೂ ಪೊಲೀಸ್ ಠಾಣೆಯ ಮಹಜರ್ ವರದಿಯಲ್ಲಿ ದಾಖಲಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆ ಸಮಂಜಸವಾಗಿದ್ದರೂ, ಕೆಸಿಎಸ್ಆರ್‌ನ ನಿಯಮ 59ರನ್ವಯ ನಿಗದಿತ ಅವಧಿ ಇಲ್ಲದೆ, ಕನಿಷ್ಟ ಮಟ್ಟಕ್ಕೆ ವೇತನ ಇಳಿಸಿರುವುದು ಸರಿ ಇಲ್ಲದಿರುವುದರಿಂದ, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರ ವೇತನವನ್ನು ಅವರ ವೇತನ ಶ್ರೇಣಿಯ ಕನಿಷ್ಟ ವೇತನಕ್ಕೆ ಎರಡು ವರ್ಷಗಳ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೇ, ದಂಡನಾ ಅವಧಿಯ ನಂತರ ದಂಡನಾದೇಶದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನಕ್ಕೆ ವೇತನವನ್ನು ನಿಗದಿಪಡಿಸಿ, ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಗಳಿಸುವಂತೆ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವ ದಂಡನೆ ವಿಧಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಆಯೋಗವು ದಿನಾಂಕ:19-02-2007ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 368 ಪೊಸಿಅ 2006 ಬೆಂಗಳೂರು ದಿನಾಂಕ:09-03-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ:13-04-2000ರ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಪೂರ್ವ ವಿಭಾಗ ಬೆಂಗಳೂರು ನಗರ ಇವರ ಆದೇಶವನ್ನು ಭಾಗಶ: ಮಾರ್ಪಡಿಸಿ, ಶ್ರೀ ಶಾಂತಿಪ್ರಸಾದ್, ಪಿಸಿ-4035 (ಪ್ರಸ್ತುತ) ವಿಜಯನಗರ, ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ:30-06-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪರಿಶೀಲಿಸಿ,

1) ಅವರ ವೇತನವನ್ನು ಅವರು ಪಡೆಯುತ್ತಿರುವ ವೇತನ ಶ್ರೇಣಿಯ ಕನಿಷ್ಟ ವೇತನಕ್ಕೆ ಎರಡು ವರ್ಷಗಳ ಅವಧಿಗೆ ಇಳಿಸಿದೆ.
2) ಈ ಅವಧಿಯಲ್ಲಿ ಅವರು ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸತಕ್ಕದ್ದಲ್ಲ.
3) ದಂಡನಾ ಅವಧಿಯ ನಂತರ ದಂಡನಾದೇಶಕ್ಕೆ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನಕ್ಕೆ ವೇತನವನ್ನು ನಿಗದಿಪಡಿಸಿ, ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಗಳಿಸತಕ್ಕದ್ದು.
4) ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸತಕ್ಕದ್ದು.
5) ಈ ಆದೇಶವು ಶಿಸ್ತು ಪ್ರಾಧಿಕಾರಿ ಆದೇಶ ದಿನಾಂಕದಿಂದಲೇ ಜಾರಿಗೆ ಬರತಕ್ಕದ್ದು.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC 182 CNS 2006, ದಿನಾಂಕ:19-02-2007ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 635

ವಿಷಯ: ಶ್ರೀ ಹೆಚ್.ಬಿ.ಬಸವರಾಜಯ್ಯ, ಸಿಹೆಚ್‌ಸಿ-329, ಹರದಗೆರೆ ಗುಬ್ಬಿ ತಾಲ್ಲೂಕು ತುಮಕೂರು ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

ಉಲ್ಲೇಖ: 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರ ಜ್ಞಾಪನ ಸಂಖ್ಯೆ:ಸಿಬ್ಬಂದಿ-1/95/2004-05, ಓಬಿ ಸಂಖ್ಯೆ:291/05-06, ದಿನಾಂಕ:28-10-2005 ಮತ್ತು ಆದೇಶ ಸಂಖ್ಯೆ:ಪನ್ಸಿ/ಡಿಇ/07/2005-06, ಓಬಿ ಸಂಖ್ಯೆ:266/2005-06, ದಿನಾಂಕ:25-11-2005.

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 03-05-2006.

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/46/2006, ದಿನಾಂಕ:21-04-2006.

**ಪ್ರಸ್ತಾವನೆ:**

ಶ್ರೀ ಹೆಚ್.ಬಿ.ಬಸವರಾಜಯ್ಯ, ಸಿಹೆಚ್‌ಸಿ-329, ತಿಪಟೂರು ನಗರ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

''ನೀವು ದಿನಾಂಕ:08-12-2004 ರಿಂದ ಮೇಲಾಧಿಕಾರಿಗಳ ಅನುಮತಿ ಪಡೆಯದೇ ಯಾವ ತರಹದ ರಜೆ ಅರ್ಜಿಯನ್ನು ಸಲ್ಲಿಸದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು, ಗೈರುಹಾಜರಿ ಅವಧಿ 21 ದಿನಗಳಿಗೆ ಮೀರಿದ್ದರಿಂದ ಕರ್ತವ್ಯ ತ್ಯಜಿಸಿದ ನೋಟೀಸ್ ಅನ್ನು:12/01/2005 ರಂದು ನೀಡಲಾಗಿದ್ದು, ಅದನ್ನು ದಿನಾಂಕ:16/06/2005 ರಂದು ಜಾರಿ ಮಡಿಕೊಂಡಿದ್ದರೂ ನಿಗಧಿತ ಅವಧಿಯೊಳಗೆ ಅಂದರೆ ಒಂದು ತಿಂಗಳ ಒಳಗೆ ಹಾಜರಾಗಬೇಕೆಂದು ತಿಳಿಸಿದ್ದರೂ ಕೂಡಾ ತಾವು ಗೈರುಹಾಜರಾಗಿರುತ್ತೀರಿ. ಈ ಹಿಂದೆ ದಿನಾಂಕ:27-08-2004 ರಿಂದ 03-10-2004 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು, ನೀವು ಪದೇ ಪದೇ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತೀರಿ. ಆದ್ದರಿಂದ ನೀವು ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ತೋರಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಅರ್ಜಿದಾರರಿಗೆ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:28-10-2005ರ ಜ್ಞಾಪನದಲ್ಲಿ ಅರ್ಜಿದಾರರಿಗೆ ವೈಯಕ್ತಿಕ ಹಾಗೂ ಕೌಟುಂಬಿಕ ಕಾರಣಗಳಿಂದ ಸ್ವಯಂ ನಿವೃತ್ತಿ ಹೊಂದಲು KCSRsನ ನಿಯಮ 285(1) ಕ್ಲಾಸ್ (ಎ) ರನ್ವಯ ದಿನಾಂಕ:31-10-2005ರಂದು ಸೇವೆಯಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ ಮತ್ತು ದಿನಾಂಕ:25-11-2005ರ ಆದೇಶದಲ್ಲಿ ಅರ್ಜಿದಾರರಿಗೆ ದಿನಾಂಕ:27-08-2004 ರಿಂದ 03-10-2004 ರವರೆಗೆ ಮತ್ತು ದಿನಾಂಕ:08-12-2004 ರಿಂದ 08-08-2005 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಅವಧಿಯನ್ನು ಸಂಬಳ ರಹಿತ ರಜೆ ಎಂದೂ, ಅಮಾನತ್ತಿನ ಅವಧಿ ದಿನಾಂಕ:09-08-2005 ರಿಂದ 23-10-2005 ರವರೆಗೆ ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

'ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಮೇಲಾಧಿಕಾರಿಗಳ ಅನುಮತಿ ಪಡೆಯದೇ ಗೈರುಹಾಜರಾಗಿರುವುದು ಅವರೇ ತಿಳಿಸಿರುವಂತೆ ಅವರ ಅನಾರೋಗ್ಯ ವೃದ್ಧ ತಾಯಿ, ಮತ್ತೆ ಇಬ್ಬರು ಮಾನಸಿಕ ಕಾಯಿಲೆಯಿಂದ ನರಳುತ್ತಿರುವ ತಂಗಿಯರು ಇವರಿಂದ ಮನಸ್ಸಿಗೆ ನೆಮ್ಮದಿ ಇಲ್ಲದೇ ಕರ್ತವ್ಯನಿರ್ವಹಿಸಲು ಸಾಧ್ಯವಾಗುತ್ತಿಲ್ಲವೆಂದು ದಿನಾಂಕ:31-07-2005ರಲ್ಲಿ ಅವರೇ ಸ್ವತ: ಸ್ವಯಂ ನಿವೃತ್ತಿ ಹೊಂದಲು ಅನುಮತಿ ಕೋರಿರುವುದು ಕಂಡುಬರುತ್ತದೆ. ಮುಂದುವರೆದು ಜೀವನಾಂಶ ಭತ್ಯೆಯನ್ನು ಅಮಾನತ್ತಿನ ಅವಧಿಗೆ ಪಡೆಯಲು ಪ್ರತಿ ತಿಂಗಳೂ ಬೇರೆ ಯಾವುದೇ ಖಾಸಗಿ ಕೆಲಸದಲ್ಲಿ ತೊಡಗಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರ ನೀಡಬೇಕಾಗಿದ್ದು, ಅರ್ಜಿದಾರರು ಇದನ್ನು ನೀಡದಿರುವ ಕಾರಣ ಜೀವನಾಧಾರ ಭತ್ಯೆ ನೀಡಿರುವುದಿಲ್ಲ. ಅರ್ಜಿದಾರರಿಗೆ ದಿನಾಂಕ:31-10-2005 ರಿಂದ ಸ್ವಯಂ ನಿವರತ್ತಿ ಹೊಂದಲು ಅನುಮತಿ ನೀಡುವ ಮುನ್ನಾ ಅವರೇ ಸಲ್ಲಿಸಿದ ದಿನಾಂಕ:31-07-2005ರ ಮನವಿಯನ್ನು ಹಿಂತೆಗೆದುಕೊಳ್ಳುವ ಬಗ್ಗೆ ಯಾವುದೆ ಮನವಿಯನ್ನೂ ಸಲ್ಲಿಸದಿರುವುದನ್ನೂ ಗಮನಿಸಲಾಗಿದೆ. ಇದಲ್ಲದೇ, ಅವರ ಪತ್ನಿಯು ದಿನಾಂಕ:06-01-2006 ರಲ್ಲಿ ಚಿಕ್ಕನಾಯಕಹಳ್ಳಿ ಸಿವಿಲ್‌ಜಡ್ಜ್ ನ್ಯಾಯಾಲಯದಲ್ಲಿ ಓಎಸ್ ಸಂಖ್ಯೆ:07/2006ರಲ್ಲಿ ದಾವೆ ಹೂಡಿ, ತಮ್ಮ ಪತಿ 4-5 ವರ್ಷಗಳಿಂದ ತನ್ನನ್ನೂ, ತನ್ನ ಮಕ್ಕಳನ್ನೂ ಸರಿಯಾಗಿ ನೋಡಿಕೊಳ್ಳದಿರುವ ಬಗ್ಗೆ ಪ್ರಸ್ತಾಪಿಸಿ, ಸ್ವಯಂ ನಿವೃತ್ತಿ ನಂತರ ಬರುವ ಸೌಲಭ್ಯಗಳನ್ನು ತಮಗೆ ದೊರಕಿಸಿಕೊಡುವಂತೆ ಕೋರಿರುವುದನ್ನು ಗಮನಿಸಲಾಗಿದೆ. ಆದ್ದರಿಂದ ಶಿಸ್ತುಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 375 ಪೊಸಿಅ 2006 ಬೆಂಗಳೂರು ದಿನಾಂಕ:09-03-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಬಿ. ಬಸವರಾಜಯ್ಯ, ನಿವೃತ್ತ

ಸಿಹೆಚ್‌ಸಿ-329, ಹರದಗೆರೆ, ಗುಬ್ಬಿ ತಾಲ್ಲೂಕು ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:03-05-2006ರಂದು ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 646

**ವಿಷಯ:** ಶ್ರೀ ಜಿ.ಶಿವಕುಮಾರ್ ಸಿಹೆಚ್‌ಸಿ-242, ದಾವಣಗೆರೆ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

**ಓದಲಾಗಿದೆ.** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)ಇವಿ-2/151/2004, ದಿನಾಂಕ:23-12-2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ರವರ ಆದೇಶ ಸಂಖ್ಯೆ:61/ಅಪೀಲು/2004-05, ದಿನಾಂಕ:08-06-2005.

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 17-02-2006.

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)36/2006, ದಿನಾಂಕ:26-06-2006.

**ಪ್ರಸ್ತಾವನೆ:**

ಶ್ರೀ ಜಿ.ಶಿವಕುಮಾರ್, ಸಿಹೆಚ್‌ಸಿ-242 ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ)ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

"ಸಿಹೆಚ್‌ಸಿ-242 ಜಿ.ಶಿವಕುಮಾರ್, ಸಂಚಾರಿ ಠಾಣೆ, ದಾವಣಗೆರೆ ಆದ ನಿಮಗೆ ದಿನಾಂಕ:01-08-2004ರಂದು ಮಧ್ಯಾಹ್ನ 2-00 ಗಂಟೆಯಿಂದ ಸಿ.ಜಿ. ಆಸ್ಪತ್ರೆ ರಸ್ತೆಯಲ್ಲಿ ಸಂಚಾರಿ ನಿಯಂತ್ರಣ ಕರ್ತವ್ಯಕ್ಕೆ ನೇಮಕ ಮಾಡಿದ್ದು, ನೀವು ಸದರಿ ದಿನದಂದು ಸಂಜೆ 5-15 ಗಂಟೆ ಸಮಯದಲ್ಲಿ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ರವರು ಬರುತ್ತಿರುವಾಗ ನೀವು ನಿಮ್ಮ ಕರ್ತವ್ಯನಿರ್ವಹಿಸದೇ ಮೋದಿ ಸರ್ಕಲ್ ಹತ್ತಿರ ಯಾರೋ ಕೆಲವು ಸಾರ್ವಜನಿಕರು ಮತ್ತು ಆಟೋ ಚಾಲಕರೊಂದಿಗೆ ಅಸಭ್ಯ ರೀತಿಯಿಂದ ಹರಟೆ ಹೊಡೆಯುತ್ತಾ, ನಿಮ್ಮ ಕರ್ತವ್ಯನಿರ್ವಹಿಸದೇ ಬೇಜವಾಬ್ದಾರಿತನವನ್ನು ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣೆ ಪತ್ರ ಹೊರಡಿಸಿ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:23-12-2004ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಜಿಲ್ಲೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಲಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:08-06-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪೊಲೀಸ್ ಅಧೀಕ್ಷಕರವರೇ ಸ್ವತ: ಬರುತ್ತಿರುವಾಗ ಅರ್ಜಿದಾರರು ಸಂಚಾರಿ ನಿಯಂತ್ರಣ ಕರ್ತವ್ಯವನ್ನು ನಿರ್ವಹಿಸದೇ, ಯಾರೋ ಸಾರ್ವಜನಿಕರು, ಆಟೋ ಚಾಲಕರೊಂದಿಗೆ ಹರಟೆ ಹೊಡೆಯುತ್ತಿರುವುದನ್ನು ಗಮನಿಸಿ, ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ನೀವು ಕರ್ತವ್ಯದಲ್ಲಿ ಅಶಿಸ್ತು ತೋರಿರುವುದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಲಘು ಸ್ವರೂಪದ್ದಾಗಿರುತ್ತದೆ. ಸದರಿ ದಂಡನೆಯನ್ನು ಪುನ: ಕಡಿಮೆ ಮಾಡಲು ಯಾವುದೇ ಸಕಾರಣಗಳು ಇರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 53 ಪೊಸಿಅ 2007 ಬೆಂಗಳೂರು ದಿನಾಂಕ:24–03–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಶಿವಕುಮಾರ್, ಸಿಹೆಚ್‌ಸಿ–242, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:17–02–2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 645

**ವಿಷಯ:** ಶ್ರೀ ಚಿದಾನಂದ, ಸಿಪಿಸಿ–20, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಉಲ್ಲೇಖ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ–(2)ಡಿಇ/12/2003–04, ಓಬಿ ಸಂಖ್ಯೆ:11/2004–05, ದಿನಾಂಕ:29–03–2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು–5/2004–05, ದಿನಾಂಕ:17–01–2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 18–12–2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/10/2006, ದಿನಾಂಕ:19–04–2006.

**ಪ್ರಸ್ತಾವನೆ:**

ಶ್ರೀ ಚಿದಾನಂದ, ಸಿಪಿಸಿ–20, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

''ದಿನಾಂಕ:12–12–2002 ರಿಂದ ರಾತ್ರಿ 10–30 ಗಂಟೆಯಲ್ಲಿ ಮಂಡ್ಯ ವೃತ್ತ ನಿರೀಕ್ಷಕರು ಮಂಡ್ಯ ನಗರದ ಚಾಮುಂಡೇಶ್ವರಿ ದೇವಸ್ಥಾನದ ಬಳಿ 3 ಜನರು ಗಲಾಟೆ ಮಾಡುತ್ತಿದ್ದು, ಆ ಪೈಕಿ ಮೋಹನ ಮುರುಳಿ ಎಂಬುವವರನ್ನು ವಿಚಾರಣೆ ಮಾಡಲು ಮಂಡ್ಯ ಪಶ್ಚಿಮ ಠಾಣೆಗೆ ಬಿಟ್ಟು ಪುನ: ಸಿಪಿಐ, ನಗರ ವೃತ್ತ ರವರು ಸ್ಪೋರ್ಟ್ಸ್ ಕ್ಲಬ್ ಮುಂದೆ ನಿಂತಿದ್ದ ಸಿಬ್ಬಂದಿಯನ್ನು ವಿಚಾರ ಮಾಡುತ್ತಿದ್ದಾಗ ಶ್ರೀ ಚಿದಾನಂದ ಸಿಪಿಸಿ–20 ಆದ ನೀವು ಪಾನಮತ್ತರಾಗಿ ಸಿಪಿಐ ರವರನ್ನು ಅಡ್ಡ ಹಾಕಿ ನೀವು ನನ್ನ ತಮ್ಮನನ್ನು ಹೇಗೆ ಕರೆದುಕೊಂಡು ಹೋದಿರಿ ಎಂದು ಗಲಾಟೆ ಮಾಡಿ ಮೇಲಾಧಿಕಾರಿಗಳೊಂದಿಗೆ ಅಸಭ್ಯವಾಗಿ ವರ್ತಿಸಿರುತ್ತೀರಿ. ಅಲ್ಲದೇ ನೀವು ಶಿಸ್ತಿನ ಇಲಾಖೆಯಲ್ಲಿದ್ದುಕೊಂಡು ಸಿಪಿಐ, ರವರ ಕರ್ತವ್ಯಕ್ಕೆ ಅಡ್ಡಿಪಡಿಸಿ ಅವರಿಗೆ ಬೆದರಿಕೆ ಹಾಕಿ ಅತೀವ ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ರವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29–03–2004ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ಮುಂದೂಡಿ ದಿನಾಂಕ:18–12–2002 ರಿಂದ 24–05–2003ರವರೆಗೆ ಅಮಾನತ್ತೆಂದು ಪರಿಗಣಿಸಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರ್ದೇಶಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:17–01–2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಮೇಲಾಧಿಕಾರಿಗಳೊಂದಿಗೆ ಅಸಭ್ಯವಾಗಿ ವರ್ತಿಸಿ, ಸಿಪಿಐ, ರವರ ಕರ್ತವ್ಯಕ್ಕೆ ಅಡ್ಡಿಪಡಿಸಿ ಬೆದರಿಕೆ ಹಾಕಿ ಅತೀವ ದುರ್ನಡತೆ ಎಸಗಿರುವ ಸಂಬಂಧ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ:ಒಇ 77 ಪೊಸಿಅ 2007 ಬೆಂಗಳೂರು ದಿನಾಂಕ:24–03–2007

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಚಿದಾನಂದ, ಸಿಪಿಸಿ–20, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:18–12–2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

ಆರ್.ಎ.ಕುಲಕರ್ಣಿ
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 644

**ವಿಷಯ:** ಶ್ರೀ ಡಿ.ಬಿ.ಭಜಂತ್ರಿ, ಎಹೆಚ್‌ಸಿ–106 ಗದಗ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಓದಲಾಗಿದೆ.**
1) ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/113/ಉವ/2005–06, ದಿನಾಂಕ:19–05–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ ರವರ ಆದೇಶ ಸಂಖ್ಯೆ:ಡಿಇ: ಪಿಆರ್:104/98, ದಿನಾಂಕ:25–06–1998.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19–04–2005.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)81/2005, ದಿನಾಂಕ:21–04–2006.

**ಪ್ರಸ್ತಾವನೆ:**

ಶ್ರೀ ಡಿ.ಕೆ.ಭಜಂತ್ರಿ, ಎಹೆಚ್‌ಸಿ–106, ಡಿಎಆರ್., ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೊಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

''ಆಪಾದಿತ ಪೊಲೀಸ್ ಅಧಿಕಾರಿ ಎ.ಹೆಚ್.ಸಿ.–106 ಡಿ.ಬಿ. ಭಜಂತ್ರಿ, ಡಿಎಆರ್, ಗದಗ ರವರು ನೀವು ಅನುಕ್ರಮವಾಗಿ ಎ.ಪಿ.ಸಿ. ಹಾಗೂ ಎ.ಎಚ್.ಸಿ. ಅಂತಾ ಡಿ.ಎ.ಆರ್. ಗದಗದಲ್ಲಿ ಕರ್ತವ್ಯನಿರ್ವಹಿಸುತ್ತಿರುವಿರಿ. ದಿನಾಂಕ:10–06–1998 ರಂದು ಪೊಲೀಸ್ ಸೂಪರಿಟೆಂಡೆಂಟ್‌ರವರ ಕಚೇರಿಯಲ್ಲಿ ಗಾರ್ಡ್ ಕಮಾಂಡರ್ ಹಾಗೂ ಸೆಂಟ್ರಿ ಡ್ಯುಟಿಯಲ್ಲಿ ಇರುವ ನೀವು ಸುಮಾರು 10–55 ನಿಮಿಷಕ್ಕೆ ಪೊಲೀಸ್ ಸೂಪರಿಟೆಂಡೆಂಟರು ಗದಗ ರವರು ಡಿ.ಪಿ.ಓ.ಕ್ಕೆ ಆಕಸ್ಮಿಕ ಬೇಟಿಯನ್ನು ನೀಡಿದಾಗ ಮುಖ್ಯವಾದ ಕರ್ತವ್ಯದಲ್ಲಿದ್ದ ನೀವು ಸಮವಸ್ತ್ರ ಧರಿಸದೇ ಮಪ್ತಿಯಲ್ಲಿದ್ದು, ಮೇಲಾಧಿಕಾರಿಗಳಿಗೆ ಅಗೌರವ ಸಲ್ಲಿಸಿ ನಿಮ್ಮ ಕರ್ತವ್ಯದಲ್ಲಿ ಚ್ಯುತಿ ಬರುವಂತೆ ನಡೆದುಕೊಂಡಿದ್ದಲ್ಲದೆ, ಶಿಸ್ತಿನ ಇಲಾಖೆಯಲ್ಲಿರುವ ನೀವು ಅತ್ಯಂತ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣೆ ಪತ್ರ ಹೊರಡಿಸಿ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:19–05–2005ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:25–06–1998ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಗಾರ್ಡ್ ಕಮಾಂಡರ್ ಹಾಗೂ ಸೆಂಟ್ರಿ ಡ್ಯೂಟಿಯಲ್ಲಿ ಇರುವಾಗ ಪೊಲೀಸ್ ಅಧೀಕ್ಷಕರು, ರವರು ಭೇಟಿ ನೀಡಿದ ಸಮಯದಲ್ಲಿ ಸಮವಸ್ತ್ರ ಧರಿಸದೆ ಅಗೌರವ ತೋರಿಸಿದ್ದು, ಹಾಗೂ ಅಶಿಸ್ತಿನಿಂದ ವರ್ತಿಸಿರುವುದನ್ನು ಪರಿಗಣಿಸಿ ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆ ಅತೀ ಕಡಿಮೆ ಸ್ವರೂಪದ್ದಾಗಿರುತ್ತದೆ. ಸದರಿ ದಂಡನೆಯನ್ನು ಪುನ: ಕಡಿಮೆ ಮಾಡಲು ಯಾವುದೇ ಸಕಾರಣಗಳು

ಇರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 45 ಪೊಸಿಅ 2007 ಬೆಂಗಳೂರು ದಿನಾಂಕ:24–03–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಬಿ.ಭಜಂತ್ರಿ, ಎಹೆಚ್‌ಸಿ–106 ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:19–04–2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 643

**ವಿಷಯ:** ಶ್ರೀ ಉಮಾಜಿ, ಎಪಿಸಿ–364, ಡಿಎಆರ್., ಗುಲ್ಬರ್ಗಾ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಓದಲಾಗಿದೆ.**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಜಿಲ್ಲೆ, ಡಿಇ/5/84–85, ಇವರ ಆದೇಶ ಸಂಖ್ಯೆ:ಡಿಇ/5/84–85/ಡಿಒಬಿ ಸಂಖ್ಯೆ:1473/84–85, ದಿನಾಂಕ:07–02–1985.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು/24/ಈವ/2004, ದಿನಾಂಕ:08–11–2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:24–01–2005
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಅಪೀಲು(2)31/2005, ದಿನಾಂಕ:26–10–2006.

**ಪ್ರಸ್ತಾವನೆ:**

ಶ್ರೀ ಉಮಾಜಿ, ಎಪಿಸಿ–364, ಡಿಎಆರ್., ಗುಲ್ಬರ್ಗಾ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ಮತ್ತು 8ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

''ಪಿಸಿ–364, ಉಮಾಜಿ ಮತ್ತು ಪಿಸಿ–169 ರುಕ್ಮಾಜಿ ನೀವು ಜಿಲ್ಲಾ ಪೊಲೀಸ್ ಸಶಸ್ತ್ರ ಪಡೆ, ಗುಲ್ಬರ್ಗಾದಲ್ಲಿ ಪಿ.ಸಿ.ಗಳೆಂದು ಕೆಲಸ ಮಾಡುತ್ತಿದ್ದು, ದಿನಾಂಕ:27–06–1984ರಂದು ಖೈದಿ ಹನೀಫ್ ಇತನ ಎಸ್ಕಾರ್ಟ ಡ್ಯೂಟಿ ನೇಮಿಸಿದ್ದು, ನಿಮ್ಮಿಬ್ಬರ ನಿರ್ಲಕ್ಷತನದಿಂದ ಕಸ್ಟಡಿಯಲ್ಲಿದ್ದ ಸದರಿ ಖೈದಿಯು ತಪ್ಪಿಸಿಕೊಂಡು ಓಡಿ ಹೋಗಿ ಪರಾರಿಯಾಗಿರುತ್ತಾರೆ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರುಗಳ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:07–02–1985ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಠ ಮಟ್ಟಕ್ಕೆ ಎರಡು ವರ್ಷಗಳ ಅವಧಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:08–11–2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪರಿಷ್ಕರಿಸಲು ಯಾವುದೇ ಅಂಶಗಳು ಅಥವಾ ಯಾವುದೇ ಸಕಾರಣಗಳನ್ನು ನೀಡಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತುಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 70 ಪೊಸಿಅ 2005 ಬೆಂಗಳೂರು ದಿನಾಂಕ:24-03-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಉಮಾಜಿ, ಎಪಿಸಿ-364, ಡಿಎಆರ್., ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:24-01-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 642

**ವಿಷಯ:** ಶ್ರೀ ಎಲ್.ಸಿ.ಇಮ್ಮಡಿ, ಸಿಪಿಸಿ-1111, ಹುನಗುಂದ ಪೊಲೀಸ್ ಠಾಣೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ-3 ಡಿಇ-1/ 2005-06, ಆಪು ಸಂಖ್ಯೆ:370/2005, ದಿನಾಂಕ:18-08-2005

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು-51/ಉವ/2005, ದಿನಾಂಕ:07-01-2006.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 22-09-2006.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/ 98/2006-07, ದಿನಾಂಕ:12-12-2006.

**ಪ್ರಸ್ತಾವನೆ:**

ಶ್ರೀ ಎಲ್.ಸಿ.ಇಮ್ಮಡಿ, ಸಿಪಿಸಿ-1111, ಹುನಗುಂದ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

''ಆಪಾದಿತರಾದ ನೀವು ಎಲ್.ಸಿ.ಇಮ್ಮಡಿ, ಸಿಪಿಸಿ-1111, ಹುನಗುಂದ ಪೊಲೀಸ್ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿದ್ದು, ದಿನಾಂಕ:27-12-2004 ರಿಂದ 29-12-2004, ದಿನಾಂಕ:01-01-2005 ರಿಂದ 04-01-2005 ರವರೆಗೆ ಮತ್ತು ದಿನಾಂಕ:08-01-2005 ರಿಂದ ಈವರೆಗೆ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರಹಾಜರ ಉಳಿದಿರುತ್ತೀರಿ. ದಿನಾಂಕ:10-02-2005ರಂದು ಕರ್ತವ್ಯ ಪಲಾಯನ ಪತ್ರ ಹೊರಡಿಸಿ ಅದನ್ನು ನಿಮಗೆ ದಿನಾಂಕ:18-02-2005ರಂದು ಜಾರಿ ಮಾಡಲಾಗಿದ್ದು, ಜಾರಿಯಾದ 7 ದಿವಸದೊಳಗಾಗಿ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ ರವರನ್ನು ಕಂಡು ಗೈರುಹಾಜರ ಉಳಿದಿದ್ದಕ್ಕೆ ಕಾರಣಗಳನ್ನು ತಿಳಿಸದೇ ಮತ್ತು ನೀವು ನಿಮ್ಮ ಇರುವಿಕೆಯ ಬಗ್ಗೆ ಸಹ ತಿಳಿಸದೇ ಮೇಲಾಧಿಕಾರಿಗಳ ಆದೇಶ ಅಮಾನ್ಯ ಮಾಡಿರುತ್ತೀರಿ. ನೀವು ಪದೇ ಪದೇ ಅನಧೀಕೃತವಾಗಿ ಕರ್ತವ್ಯಕ್ಕೆ ಗೈರುಹಾಜರ ಉಳಿಯುವ ಸ್ವಭಾವದವರಿದ್ದು ಸರ್ಕಾರಿ ಕರ್ತವ್ಯಕ್ಕೆ ಅಡೆತಡೆ ಉಂಟು ಮಾಡಿ ಕರ್ತವ್ಯದಲ್ಲಿ ಘೋರ ದುರ್ನಡತೆ, ಅಶಿಸ್ತು, ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ರವರು ಮೇಲೆ ಕಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:18-08-2005ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ, ಗೈರುಹಾಜರಿ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:07-01-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು 8 ತಿಂಗಳಿಗಿಂತ ಹೆಚ್ಚಿನ ಅವಧಿಗೆ ಗೈರುಹಾಜರಾಗಿರುವುದು ಕಂಡುಬಂದಿದ್ದು, ಸುತ್ತೋಲೆ ಸಂಖ್ಯೆ:ಸಿಆಸುಇ 18 ಸೇಇವಿ 2001, ದಿನಾಂಕ:14-07-2001ರ ಪ್ರಕಾರ 4 ತಿಂಗಳಿಗೂ ಮೀರಿದ ಅನಧಿಕೃತ ಗೈರುಹಾಜರಿಗೆ ಸೇವೆಯಿಂದ ತೆಗೆಯುವ ಶಿಕ್ಷೆಯನ್ನು ವಿಧಿಸಬಹುದಾಗಿದೆ. ಆದರೆ, ಇವರನ್ನು ಕಡ್ಡಾಯ ನಿವೃತ್ತಿಗೊಳಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ:ಒಇ 62 ಪೊಸಿಅ 2007 ಬೆಂಗಳೂರು ದಿನಾಂಕ:24–03–2007

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಲ್.ಸಿ.ಇಮ್ಮಡಿ, ಸಿಪಿಸಿ–1111, ಹುನಗುಂದ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:22–09–2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 641

**ವಿಷಯ:** ಶ್ರೀ ಹೆಚ್.ಎನ್.ಸಿದ್ದಯ್ಯ, ಪಿಎಸ್‌ಐ, ಆಲ್ದೂರು ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಓದಲಾಗಿದೆ.**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮೈಸೂರು, ಇವರ ಆದೇಶ ಸಂಖ್ಯೆ:ಶಿಕ್ಷೆ:137/2005–06, ದಿನಾಂಕ:26–05–2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು/3/2006–07, ದಿನಾಂಕ:09–08–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23–04–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)86/2006–07, ದಿನಾಂಕ:09–11–2006.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC / 216 / CNS / 2006, ದಿನಾಂಕ:22–03–2007.

**ಪ್ರಸ್ತಾವನೆ:**

ಶ್ರೀ ಹೆಚ್.ಎನ್.ಸಿದ್ದಯ್ಯ, ಪಿಎಸ್‌ಐ, ಆಲ್ದೂರು ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

''ನೀವು ಕೆ.ಆರ್.ನಗರ, ಪೊಲೀಸ್ ಠಾಣೆಯ ಯು.ಡಿ.ಆರ್. ಸಂ.32/2005 ಕಲಂ 174 ಸಿಆರ್‌ಪಿಸಿ ಪ್ರಕರಣದ ತನಿಖಾಧಿಕಾರಿಯಾಗಿದ್ದು, ಸದರಿ ಪ್ರಕರಣದಲ್ಲಿ ಕೊಲೆಯಾದ ವ್ಯಕ್ತಿಯ ರಕ್ತ ಸಂಬಂಧಿಗಳು ಅನುಮಾನ ಪಟ್ಟಿರುವ ಆಸಾಮಿಗಳನ್ನು ಕೂಲಂಕುಶವಾಗಿ ವಿಚಾರಣೆಗೆ ಒಳಪಡಿಸಿ, ಸತ್ಯತೆಯನ್ನು ಬಯಲಿಗೆಳೆಯುವ ಪ್ರಯತ್ನ ಮಾಡದೇ ಇರುವುದು ಮತ್ತು ವ್ಯಕ್ತಿ ಹಾಗೂ ಬಿಳಿಕೆರೆ ಮಂಜುಳಾ ರವರ ಮಧ್ಯೆ ಪ್ರೇಮ ಪ್ರಸಂಗದ ಬಗ್ಗೆ ಸಂಬಂಧಪಟ್ಟವರ ಹೇಳಿಕೆ ಪಡೆದು ಸಾಕ್ಷ್ಯ ಸಂಗ್ರಹಿಸಲು ಪ್ರಯತ್ನಿಸದೇ ಇರುವುದು ಮತ್ತು ಮೃತನ ಸಾವಿನ ಬಗ್ಗೆ ಶವ ಪರೀಕ್ಷೆ ನಡೆಸಿದ ವೈದ್ಯಾಧಿಕಾರಿಗಳ ಅಭಿಪ್ರಾಯ ಬರುವವರೆಗೆ ತನಿಖೆಯನ್ನು ನಡೆಸದೇ ಅನಾವಶ್ಯಕ ವಿಳಂಬ ಮಾಡಿರುವುದು ಡಿವೈಎಸ್‌ಪಿ, ಮೈಸೂರು ಗ್ರಾಮಾಂತರ ಉಪ–ವಿಭಾಗ ರವರ ವರದಿಯಿಂದ ಕಂಡುಬರುತ್ತದೆ. ನೀವು ಜವಾಬ್ದಾರಿಯುತ ಠಾಣಾಧಿಕಾರಿಯಾಗಿದ್ದು, ಸದರಿ ಪ್ರಕರಣದಲ್ಲಿ ಶವ ಪರೀಕ್ಷೆ ಮಾಡಿದ ವೈದ್ಯಾಧಿಕಾರಿಗಳಿಂದ ಶವ ಪರೀಕ್ಷೆಯ ವರದಿ ಬರುವವರೆಗೆ ಕಾಯದೇ ಪ್ರಕರಣದಲ್ಲಿ ರಕ್ತ ಸಂಬಂಧಿಗಳು ನೀಡಿದ ಮಾಹಿತಿಯ ಮೇರೆಗೆ ಸಾಕ್ಷ್ಯಾಧಾರಗಳನ್ನು ಸಂಗ್ರಹಿಸಿ ಪ್ರಕರಣದ ಪ್ರಗತಿ ಸಾಧಿಸಲು ವಿಫಲರಾಗಿರುವುದರ ಮೂಲಕ ಕರ್ತವ್ಯಲೋಪವೆಸಗಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:26–05–2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷದ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:09–08–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಸಕಾಲದಲ್ಲಿ ಕಾರ್ಯಪ್ರವೃತ್ತರಾಗಿದ್ದು, ಪೋಸ್ಟ್ ಮಾರ್ಟಂ ವರದಿಯನ್ನು ಪಡೆಯದೇ ಯಾವುದೇ ಕ್ರಮ ಕೈಗೊಳ್ಳಲು ಸಾಧ್ಯವಿಲ್ಲದಿರುವುದು ಕಂಡುಬರುತ್ತದೆ. ಮೃತನು ದಿನಾಂಕ:03-11-2005 ರಂದು ಮೃತನಾಗಿದ್ದರೂ, ಅವರ ತಂದೆ ದಿನಾಂಕ:21-11-2005 ರವರೆಗೆ ದೂರು ನೀಡಿರುವುದಿಲ್ಲ. ಮೃತನ ಸಾವಿಗೆ ನಿಖರವಾದ ಮಾಹಿತಿ ಅಲಭ್ಯವಾಗಿದ್ದು, ಮೃತನ ಪೋಷಕರೂ ಸಹ ಮೃತನ ಸಾವಿನ ಬಗ್ಗೆ ಸಕಾಲದಲ್ಲಿ ಶಂಕೆ ವ್ಯಕ್ತಪಡಿಸದೇ ಇರುವುದರಿಂದ FSL ವರದಿ ಬಂದ ನಂತರ ವೈದ್ಯರು ತಲೆಗೆ ಬಲವಾದ ಪೆಟ್ಟು ಬಿದ್ದು ಸಾವು ಸಂಭವಿಸಿದೆ ಎಂದು ನೀಡಿದ ವರದಿಯ ಆಧಾರದ ಮೇಲೆ ಯುಡಿಆರ್ ಪ್ರಕರಣವನ್ನು ಕೊಲೆ ಪ್ರಕರಣವನ್ನಾಗಿ ಬದಲಾಯಿಸಲು ವಿಳಂಬವಾಗಿರುತ್ತದೆ. ಇದಕ್ಕೆ ಅರ್ಜಿದಾರರನ್ನು ಹೊಣೆಗಾರರನ್ನಾಗಿ ಮಾಡಿ, ಶಿಕ್ಷೆ ವಿಧಿಸಿರುವುದು ಸಮಂಜಸವಾಗಿರುವುದಿಲ್ಲವೆಂದು ಪರಿಗಣಿಸಿ, ಶಿಸ್ತು ಪ್ರಾಧಿಕಾರಿ ಆದೇಶವನ್ನು ರದ್ದುಪಡಿಸಿ, ಅರ್ಜಿದಾರರಿಗೆ ವಾರ್ಷಿಕ ವೇತನ ಬಡ್ತಿಗಳನ್ನು ಸಕ್ರಮಗೊಳಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:22-03-2007ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 6 ಪೊಸಿಅ 2007 ಬೆಂಗಳೂರು ದಿನಾಂಕ:28-03-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:26-05-2006ರ ಶಿಸ್ತು ಪ್ರಾಧಿಕಾರದ ಆದೇಶವನ್ನು ರದ್ದುಪಡಿಸಿ, ಶ್ರೀ ಹೆಚ್.ಎನ್.ಸಿದ್ದಯ್ಯ, ಪಿಎಸ್ಐ, ಆಲ್ದೂರು ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:23-04-2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಿ ಬಿಡುಗಡೆ ಮಾಡಲು ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರಿ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ದಿನಾಂಕ:22-03-2007ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 640

**ವಿಷಯ:** ಶ್ರೀ ಎಸ್.ಆರ್.ವಾಸು, ಸಿಪಿಸಿ-224, ಕಿಕ್ಕೇರಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಉಲ್ಲೇಖ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/2/ ಡಿಇ-97/ 2002-03, ಓಬಿ ಸಂಖ್ಯೆ:441/03-04, ದಿನಾಂಕ:12-02-2004.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 07-06-2005.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/103/2005, ದಿನಾಂಕ:31-12-2005.
4) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC 142 CNS 2006, ದಿನಾಂಕ:06-12-2006.

**ಪ್ರಸ್ತಾವನೆ:**

ಶ್ರೀ ಎಸ್.ಆರ್.ವಾಸು, ಸಿಪಿಸಿ-224, ಕಿಕ್ಕೇರಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

''ದಿನಾಂಕ:06-01-2002 ರಿಂದ ತಮ್ಮ ಮೇಲ್ಪಟ್ಟ ಅಧಿಕಾರಿಗಳಿಂದ ಅನುಮತಿ ಪಡೆಯದೇ, ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು, `ಇವರು ಕರ್ತವ್ಯಕ್ಕಾಗಿ` ಸೂಚನಾ ಪತ್ರವನ್ನು ದಿನಾಂಕ:02-03-2003ರಂದು ಸ್ವೀಕರಿಸಿಕೊಂಡಿದ್ದರೂ, ಸಹ ಕರ್ತವ್ಯಕ್ಕೆ ಬಾರದೆ, ತಮ್ಮ ಇರುವಿಕೆಯ ಬಗ್ಗೆ ತಿಳಿಸದೆ, ಅನಂತರ ಅಂಚೆಯ ಮುಖಾಂತರ ದಿನಾಂಕ:17-06-2002 ರವರೆಗೆ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಆಸ್ಪತ್ರೆ, ಬೆಂಗಳೂರಿನಲ್ಲಿ ಚಿಕಿತ್ಸೆ ಪಡೆದಿರುವುದಾಗಿ ಪ್ರಮಾಣ ಪತ್ರ ಹಾಜರುಪಡಿಸಿರುತ್ತಾರೆ. ಇವರು ಕೇಂದ್ರ ಸ್ಥಾನ ಬಿಟ್ಟು ಬೆಂಗಳೂರಿನ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದು ದಿನಾಂಕ:28-03-2003ರವರೆಗೂ ಗೈರುಹಾಜರಾಗಿರುತ್ತಾರೆ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:12–02–2004ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪಸ್ತುತ ವೇತನ ಶ್ರೇಣಿಯಲ್ಲಿ ಒಂದು ಹಂತವನ್ನು ಎರಡು ವರ್ಷದವರೆಗೆ ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ಕೆಳಗಿಳಿಸಿದ ಶಿಕ್ಷಾ ಅವಧಿಯಲ್ಲಿ ವೇತನ ಬಡ್ತಿಗಳು ಪ್ರಾಪ್ತವಾಗುವುದಿಲ್ಲ. ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಶಿಕ್ಷಾ ಅವಧಿ ಮುಗಿದು ಒಂದು ವರ್ಷದ ನಂತರ ಹೊಸದಾಗಿ ಸಂಪಾದಿಸತಕ್ಕದ್ದೆಂದು ಮತ್ತು ಗೈರುಹಾಜರಿ ಅವಧಿಯನ್ನು ಗಳಿಕೆ ರಜೆ, ಪರಿವರ್ತಿತ ರಜೆ ಮತ್ತು 209 ದಿನಗಳ ವೇತನ ರಹಿತ ರಜೆ ಎಂಬ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಮೇಲ್ಮನವಿಯನ್ನು ಸಲ್ಲಿಸಿರುವುದಿಲ್ಲ. ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ದಿನಾಂಕ:07–06–2005ರಂದು ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿರುತ್ತದೆ. ಅರ್ಜಿದಾರರು 1996ರಲ್ಲಿ ಪೇದೆ ಹುದ್ದೆಗೆ ಹಾಜರಾಗಿದ್ದು, 1996 ರಿಂದಲೇ ಸುಮಾರು ಬಾರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ. ಅರ್ಜಿದಾರರು ದಿನಾಂಕ:06–01–2002 ರಿಂದ 28–03–2003 ರವರೆಗೆ ಅನಧಿಕೃತವಾಗಿ ಗೈರುಹಾಜರಾಗಿದ್ದರೂ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ತೋರಿದ್ದರೂ, ಶಿಸ್ತು ಪ್ರಾಧಿಕಾರಿಯು ಅವರ ಕುಟುಂಬದ ಮುಂದಿನ ಭವಿಷ್ಯದ ಬಗ್ಗೆ ಅನುಕಂಪ ತೋರಿ, ಅರ್ಜಿದಾರರ ವೇತನವನ್ನು ಅವರ ವೇತನ ಶ್ರೇಣಿಯಲ್ಲಿ ಒಂದು ಹಂತವನ್ನು ಎರಡು ವರ್ಷಗಳವರೆಗೆ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಕೆಳಗಿಳಿಸಿ, ಈ ಅವಧಿಯಲ್ಲಿ ವಾರ್ಷಿಕ ವೇತನ ಬಡ್ತಿ ಇಲ್ಲದೆ, ಶಿಕ್ಷಾವಧಿಯ ಒಂದು ವರ್ಷದ ನಂತರ ಹೊಸದಾಗಿ ವಾರ್ಷಿಕ ವೇತನ ಬಡ್ತಿಗಳಿಸುವ ದಂಡನೆ ವಿಧಿಸಿರುತ್ತಾರೆ.

KCSR ನ ನಿಯಮಗಳನ್ವಯ ವೇತನ ಶ್ರೇಣಿಯಲ್ಲಿ ಒಂದು ಹಂತವನ್ನು ಎರಡು ವರ್ಷಗಳ ಅವಧಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಕೆಳಗಿಳಿಸಿರುವುದು ಸೂಕ್ತವಾಗಿದೆ. ಆದರೆ, ಶಿಕ್ಷಾ ಅವಧಿ ಮುಗಿದ ನಂತರ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷದ ನಂತರ ಹೊಸದಾಗಿ ಗಳಿಸತಕ್ಕದ್ದು ಎಂದಿರುವುದು, ಶಿಕ್ಷೆಯನ್ನು ಮೂರು ವರ್ಷಕ್ಕೆ ಇಳಿಸಿದಂತಾಗುವುದು.

ಆದ್ದರಿಂದ ಶಿಸ್ತು ಪ್ರಾಧಿಕಾರಿಯ ದಂಡನಾದೇಶದಲ್ಲಿ ನ್ಯೂನತೆಗಳಿರುವ ಕಾರಣ, ಅದನ್ನು ರದ್ದುಪಡಿಸಿ, ಅರ್ಜಿದಾರರು ಸುಮಾರು ಒಂದು ವರ್ಷ ಮೂರು ತಿಂಗಳು ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುವ ಹಿನ್ನೆಲೆಯಲ್ಲಿ ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಠ ಮಟ್ಟಕ್ಕೆ ಮೂರು ವರ್ಷಗಳ ಕಾಲ ಇಳಿಸಿ, ಈ ಮೂರು ವರ್ಷಗಳಲ್ಲಿ ಯಾವುದೇ ವೇತನ ಬಡ್ತಿ, ಗಳಿಸದೇ, ಮೂರು ವರ್ಷಗಳ ಶಿಕ್ಷಾವಧಿಯ ನಂತರ ಶಿಕ್ಷಾದೇಶದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನಕ್ಕೆ ನಿಗದಿಪಡಿಸಿ, ಅಲ್ಲಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿ ಗಳಿಸತಕ್ಕದ್ದೆಂದು ಮಾರ್ಪಾಡಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗ ದಿನಾಂಕ:06–12–2006ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 232 ಪೊಸಿಅ 2006 ಬೆಂಗಳೂರು ದಿನಾಂಕ:07–03–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:12–02–2004ರ ಶಿಸ್ತುಪ್ರಾಧಿಕಾರಿ ಆದೇಶವನ್ನು ಮಾರ್ಪಾಡಿಸಿ, ಶೀ ಎಸ್.ಆರ್.ವಾಸು, ಸಿಪಿಸಿ–224, ಕಿಕ್ಕೇರಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ:07–06–2005ರ ಮೇಲ್ಮನವಿ ಅರ್ಜಿಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಠ ಮಟ್ಟಕ್ಕೆ ಮೂರು ವರ್ಷಗಳ ಕಾಲ ಇಳಿಸಿ, ಈ ಮೂರು ವರ್ಷಗಳಲ್ಲಿ ಯಾವುದೇ ವೇತನ ಬಡ್ತಿ ಗಳಿಸದೆ, ಮೂರು ವರ್ಷಗಳ ಶಿಕ್ಷಾ ಅವಧಿಯು ಮುಗಿದ ಕೂಡಲೇ ಶಿಕ್ಷಾದೇಶದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನಕ್ಕೆ ವೇತನ ನಿಗದಿಪಡಿಸಿ, ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಗಳಿಸತಕ್ಕದ್ದು. ಉಳಿದ ಎಲ್ಲಾ ಅಂಶಗಳಿಗೂ ಶಿಸ್ತು ಪ್ರಾಧಿಕಾರಿಯ ದಿನಾಂಕ:12–02–2004ರ ಆದೇಶದಲ್ಲಿರುವಂತೆ ಮುದುವರೆಯುತ್ತವೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC 142 CNS 2006, ದಿನಾಂಕ:06–12–2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 639

**ವಿಷಯ:** ಶೀ ರಾಧಾಕೃಷ್ಣ, ಪಿಐ, ಸದಾಶಿವನಗರ, ಸಂಚಾರ ವಲಯ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಉಲ್ಲೇಖ:** 1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಸಂಚಾರ, ಪೂರ್ವ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ:ಇವಿ/155/ಸಂಚಾರ/ಆರ್–7/2001–02, ದಿನಾಂಕ:11–07–2001.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೋಲೀಸ್ ಕಮೀಷನರ್, ಸಂಚಾರ ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:77/ಅಪೀಲು/2001–02 ಓಬಿ ಸಂಖ್ಯೆ:429/2002, ದಿನಾಂಕ:18–05–2002.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 30–07–2003.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/25/2003–04, ದಿನಾಂಕ:17–01–2004.

**ಪ್ರಸ್ತಾವನೆ:**

ಶೀ ರಾಧಾಕೃಷ್ಣ, ಪಿಐ ಸದಾಶಿವನಗರ, ಸಂಚಾರ ವಲಯ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

''ಸದಾಶಿವನಗರ ಸಂಚಾರ ವಲಯದ ಕಾರ್ಯವ್ಯಾಪ್ತಿಯ ಅಧಿಕಾರಿಯಾದ ನಿಮಗೆ ಮೋಟಾರು ವಾಹನಗಳ ಕಾಯಿದೆ ಅಡಿಯಲ್ಲಿ ಅಪಾಯಕಾರಿ ವಾಹನಗಳ ಚಾಲನೆ, ಮಧ್ಯಪಾನ ಸೇವಿಸಿ ವಾಹನಗಳ ಚಾಲನೆ, ಮಿತಿಗಿಂತ ಹೆಚ್ಚು ವೇಗವಾಗಿ ವಾಹನ ಚಾಲನೆ, ಸಂಚಾರ ಸೂಚನೆ ಉಲ್ಲಂಘನೆ ಇತ್ಯಾದಿ ಪ್ರಕರಣಗಳಲ್ಲಿ ಹೆಚ್ಚಿನ ಸಂಖ್ಯೆಯ ಪ್ರಕರಣಗಳನ್ನು ದಾಖಲಿಸಿ ಅಪಘಾತಗಳನ್ನು ನಿಯಂತ್ರಿಸುವಲ್ಲಿ ಕ್ರಮ ಕೈಗೊಳ್ಳಲು ಹಿರಿಯ ಅಧಿಕಾರಿಗಳು ಸೂಚಿಸಿದ್ದರೂ ಸಹ ಯಾವುದೇ ಪ್ರಗತಿ ತೋರಿಸಿರುವುದಿಲ್ಲ ಮತ್ತು ಪ್ರಸ್ತುತ ಸಾಲಿನ ಜನವರಿಯಿಂದ ಮೇ ತಿಂಗಳಿನವರೆಗೆ ಕೇವಲ 983 ಕಡಿಮೆ ಪ್ರಕರಣಗಳನ್ನು ದಾಖಲಿಸಿರುತ್ತೀರಿ. ನಿಮ್ಮ ಸಂಚಾರ ವಲಯದ ವ್ಯಾಪ್ತಿಯಲ್ಲಿ ಉತ್ತಮ ಗುಣಮಟ್ಟದ ಪ್ರಕರಣಗಳನ್ನು ದಾಖಲಿಸದೇ ಕರ್ತವ್ಯಲೋಪವೆಸಗಿ ದುರ್ನಡತೆ ಪ್ರದರ್ಶಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೋಲೀಸ್ ಕಮೀಷನರ್, ಸಂಚಾರ, ಪೂರ್ವ ವಿಭಾಗ, ಬೆಂಗಳೂರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ :11–07–2001ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಆರು ತಿಂಗಳ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೋಲೀಸ್ ಕಮೀಷನರ್, ಸಂಚಾರ, ಬೆಂಗಳೂರು ನಗರ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:18–05–2002ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಖ್ರಿ ವೃತ್ತದ ಬಳಿ ಗೇಡ್ ಸೆಪರೇಟರ್ ಕಾಮಗಾರಿ ನಡೆಯುತ್ತಿರುವ ಕಾರಣ ಆ ಕಡೆ ಹೆಚ್ಚಿನ ಗಮನ ಹರಿಸಿದ್ದಾಗಿ ಹಾಗೂ ಗಣ್ಯ ವ್ಯಕ್ತಿಗಳ ಆಗಮನ, ನಿರ್ಗಮನದ ಬಗ್ಗೆ ಹೆಚ್ಚು ಗಮನ ಹರಿಸಬೇಕಾಗಿದ್ದ ಕಾರಣ, ಕೇಸ್‌ಗಳನ್ನು ದಾಖಲಿಸಲು ಕಷ್ಟವಾಗಿದೆ ಎಂದು ಅವರೇ ತಿಳಿಸಿರುತ್ತಾರೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 11 ಪೊಸಿಅ 2004 ಬೆಂಗಳೂರು ದಿನಾಂಕ:17–03–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶೀ ರಾಧಾಕೃಷ್ಣ, ಪಿಐ, ಸದಾಶಿವನಗರ, ಸಂಚಾರ ವಲಯ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:30–07–2003ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 638

**ವಿಷಯ:** ಶೀ ಕೆ.ಎನ್.ಎ.ರೆಡ್ಡಿ, ಡಿ.ಎಸ್.ಪಿ., ಶೀ ಮುನಿಯಪ್ಪ, ಪಿ.ಎಸ್.ಐ. ಮತ್ತು ಶ್ರೀ .ಕೆ.ವಿವೇಕಾನಂದ, ಸಿ.ಪಿ.ಐ.ರವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯ ಬಗ್ಗೆ.

**ಉಲ್ಲೇಖ:**
1) ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ(5)22/2003–04 ದಿನಾಂಕ 03–01–20
2) ಸರ್ಕಾರದ ಆದೇಶ ಸಂಖ್ಯೆ:ಒಇ 212 ಪೊಸಿಪ 2004 ದಿನಾಂಕ 9–5–2005.
3) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಸಿಬಿ(5)2/2003–04 ದಿನಾಂಕ 30–04–2007.

**ಪ್ರಸ್ತಾವನೆ:**

ಕೆ.ಜಿ.ಎಫ್.ಜಿಲ್ಲೆಯ ಚಾಂಪಿಯನ್ ರೀಫ್ ಪೊಲೀಸ್ ಠಾಣೆಯಲ್ಲಿ ದಾಖಲಾದ ಮೊಕದ್ದಮೆ ಸಂಖ್ಯೆ:1:04:ಕಲಂ 143,146,147,148,341,324, 307,201,302 ರೆ.ವಿ 149 ಭಾ.ವ.ಸಂ. ಪ್ರಕರಣದಲ್ಲಿ ಕರ್ತವ್ಯ ನಿರ್ಲಕ್ಷತೆ ತೋರಿಸಿರುವ (1)

ಶ್ರೀ ಕೆ.ಎನ್.ಎ. ರೆಡ್ಡಿ, ಡಿ.ಎಸ್.ಪಿ., ಡಿ.ಸಿ.ಆರ್.ಬಿ., ಬೆಂಗಳೂರು (2) ಶ್ರೀ ಎ.ಕೆ. ವಿವೇಕಾನಂದ, ಸಿ.ಪಿ.ಐ, ಉರಿಗಾಂ ವೃತ್ತ ಹಾಗೂ (3) ಶ್ರೀ ಟಿ. ಮುನಿಯಪ್ಪ, ಪಿ.ಎಸ್.ಐ. ಚಾಂಪಿಯನ್ ರಿಫ್ ಪೊಲೀಸ್ ಠಾಣೆ, ಕೆ.ಜಿ.ಎಫ್. ರವರುಗಳ ವಿರುದ್ಧ ಕೆ.ಎಸ್.ಪಿ (ಶಿಸ್ತುನಡವಳಿ) ನಿಯಮಗಳು, 1965ರ ನಿಯಮ 6 ಮತ್ತು 8ರ ಅಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಹಾಗೂ ಎಸ್.ಪಿ., ಬೆಂಗಳೂರು ಜಿಲ್ಲೆ ರವರನ್ನು ವಿಚಾರಣಾಧಿಕಾರಿಯಾಗಿ ನೇಮಿಸುವಂತೆ ಕೋರಿ ಮೇಲೆ ಓದಲಾದ(1)ರ ಪತ್ರದಲ್ಲಿ ಡಿ.ಜಿ.ರವರು ಸರ್ಕಾರಕ್ಕೆ ಕೋರಿರುತ್ತಾರೆ. ಸರ್ಕಾರವು ಪರಿಶೀಲಿಸಿ ಆಪಾದಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಇಲಾಖಾ ವಿಚಾರಣೆಯನ್ನು ನಡೆಸಲು ಐ.ಜಿ.ಪಿ., ಡಿ.ಸಿ.ಆರ್.ಇ. ರವರನ್ನು ವಿಶೇಷ ಅಧಿಕಾರಹೊಂದಿದ ಇಲಾಖಾ ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ(2)ರ ಆದೇಶದಲ್ಲಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ದಿನಾಂಕ 11-04-2007ರಂದು ಇಲಾಖಾ ವಿಚಾರಣೆಯ ಅಂತಿಮ ವರದಿಯನ್ನು ಸಲ್ಲಿಸಿರುತ್ತಾರೆ.

ಡಿಜಿ ಮತ್ತು ಐಜಿಪಿ ರವರು ಮೇಲೆ(3)ರಲ್ಲಿ ಓದಲಾದ ದಿನಾಂಕ 30-04-2007ರ ತಮ್ಮ ಪತ್ರದಲ್ಲಿ ವಿಚಾರಣಾಧಿಕಾರಿಯ ಅಂತಿಮ ವರದಿಯಲ್ಲಿನ ಅಭಿಪ್ರಾಯವನ್ನು ಅನುಮೋದಿಸುತ್ತಾ ಸರ್ಕಾರದ ಅಂತಿಮ ಆದೇಶ ಕೋರಿರುತ್ತಾರೆ.

ವಿಚಾರಣಾಧಿಕಾರಿಯವರು ಅಂತಿಮ ವರದಿಯಲ್ಲಿ ನಿಯಮಾನುಸಾರ ಇಲಾಖಾ ವಿಚಾರಣೆ ನಡೆಸಿ, ಆರೋಪಿತ ಪೊಲೀಸ್ ಅಧಿಕಾರಿಗಳ ವಿರುದ್ಧದ ದೋಷಾರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 212 ಪೊಸಿಪ 2004 ಬೆಂಗಳೂರು, ದಿನಾಂಕ:19-06-2007.**

ಐ.ಜಿ.ಪಿ., ಡಿ.ಸಿ.ಆರ್.ಇ. ಹಾಗೂ ವಿಚಾರಣಾಧಿಕಾರಿಯವರು ಸಲ್ಲಿಸಿರುವ ಆರೋಪಿತ ಪೊಲೀಸ್ ಅಧಿಕಾರಿಗಳ ವಿರುದ್ಧ ದೋಷಾರೋಪಣೆಯು ಸಾಬೀತಾಗಿರುವುದಿಲ್ಲವೆಂಬ ಇಲಾಖಾ ವಿಚಾರಣಾ ವರದಿಯನ್ನು ಒಪ್ಪಿ ಆರೋಪಿತ ಪೊಲೀಸ್ ಅಧಿಕಾರಿಗಳಾದ (1) ಶ್ರೀ ಕೆ.ಎನ್.ಎ.ರೆಡ್ಡಿ, ಡಿ.ಎಸ್.ಪಿ., ಡಿ.ಸಿ.ಆರ್.ಬಿ., ಬೆಂಗಳೂರು (2) ಶ್ರೀ ಎ.ಕೆ.ವಿವೇಕಾನಂದ, ಸಿ.ಪಿ.ಐ, ಉರಿಗಾಂ ವೃತ್ತ ಹಾಗೂ (3) ಶ್ರೀ ಟಿ. ಮುನಿಯಪ್ಪ, ಪಿ.ಎಸ್.ಐ. ಚಾಂಪಿಯನ್ ರೀಫ್ ಪೊಲೀಸ್ ಠಾಣೆ ರವರುಗಳ ವಿರುದ್ಧ ಉಲ್ಲೇಖ (2)ರಲ್ಲಿ ಆದೇಶಿಸಿದ್ದ ಇಲಾಖಾ ವಿಚಾರಣೆಯ ದೋಷಾರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1167

**ವಿಷಯ:** ಕೋಲಾರ ಜಿಲ್ಲೆ ವೇಮಗಲ್ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:122-05 ಕಲಂ 498(ಎ) 304(ಬಿ) 306, ಐ.ಪಿ.ಸಿ. ಮತ್ತು 3,4,6 ಡಿ.ಪಿ. ಆಕ್ಟ್ ಪ್ರಕರಣದಲ್ಲಿ ಕರ್ತವ್ಯ ಲೋಪವೆಸಗಿದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ.

**ಉಲ್ಲೇಖ:** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ(5) 18-06/ದಿನಾಂಕ 09.11.2006

**ಪ್ರಸ್ತಾವನೆ:**

ಶ್ರೀ ನಂಜುಂಡಪ್ಪ, ಪಿ.ಎಸ್.ಐ. ಬಾಗೇಪಲ್ಲಿ ಪೊಲೀಸ್ ಠಾಣೆ, ಶ್ರೀ ಕೇಶವ, ಸಿ.ಪಿ.ಐ. ಹಾಲಿ ನಂದಿಗುಡಿ, ಬೆಂಗಳೂರು ಜಿಲ್ಲೆ ಶ್ರೀ ಬಿ.ಪಿ.ಹೆರಾಜೆ, ಡಿವೈ.ಎಸ್.ಪಿ. ಹಾಲಿ ಐ.ಜಿ.ಪಿ. ರವರ ಕಛೇರಿ, ಮಂಗಳೂರು ಇವರುಗಳ ಕೋಲಾರ ಜಿಲ್ಲೆ ವೇಮಗಲ್, ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ 122-05 ಕಲಂ 498(ಎ) 304(ಬಿ), 306 ಐಪಿಸಿ ಮತ್ತು 3,4,6 ಡಿ.ಪಿ. ಆಕ್ಟ್ ಪಕರಣದ ತನಿಖೆಯಲ್ಲಿ ಸಮರ್ಪಕ ತನಿಖೆ ಮಾಡದೆ ಈ ಕೆಳಕಂಡ ಲೋಪ ವಸಗಿರುತ್ತಾರೆ ಎಂದು ಈ ಕೆಳಕಂಡ ದೋಷಾರೋಪಣೆಯನ್ನು ಹೂರಿಸಲಾಗಿದೆ.

**2. ದೋಷಾರೋಪಣೆ:**

ಶ್ರೀ ನಂಜುಂಡಪ್ಪ, ಪಿ.ಎಸ್.ಐ. ಬಾಗೇಪಲ್ಲಿ ಪೊಲೀಸ್ ಠಾಣೆ, ಶ್ರೀ ಕೇಶವ, ಸಿಪಿಐ, ಹಾಲಿ ನಂದಿಗುಡಿ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ ಶ್ರೀ ಬಿ.ಪಿ.ಹೆರಾಜೆ, ಡಿವೈ.ಎಸ್.ಪಿ. ಹಾಲಿ ಐ.ಜಿ.ಪಿ. ರವರ ಕಛೇರಿ, ಪಶ್ಚಿಮ ವಲಯ, ಮಂಗಳೂರು ಆದ ನೀವುಗಳು ಕೋಲಾರ ಜಿಲ್ಲೆ ವೇಮಗಲ್, ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ 122/05 ಕಲಂ 498(ಎ) 304(ಬಿ), 306 ಐಪಿಸಿ ಮತ್ತು 3,4,6 ಡಿ.ಪಿ. ಆಕ್ಟ್ ಪಕರಣದ ತನಿಖೆಯಲ್ಲಿ ಸಮರ್ಪಕ ತನಿಖೆ ಮಾಡದೇ ಈ ಕೆಳಕಂಡ ಲೋಪಗಳನ್ನು ಎಸಗಿ, ತಮ್ಮ ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ, ಬೇಜಾವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

**2.1 ಶ್ರೀ ನಂಜುಂಡಪ್ಪ ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಬಾಗೇಪಲ್ಲಿ ಪೊಲೀಸ್ ಠಾಣೆ** ಆದ ನೀವು, ಫಿರ್ಯಾದಿ ವೆಂಕಟೇಶ್ ರವರು ದಿನಾಂಕ 24.06.2005 ರಂದು ಠಾಣೆಗೆ ಲಿಖಿತ ದೂರು ನೀಡಲು ಬಂದಾಗ, ಅದನ್ನು ಕೂಡಲೇ ಸ್ವೀಕರಿಸದೆ, ಕಾನೂನು ಕ್ರಮ ಕೈಗೊಳ್ಳದೆ ಸತಾಯಿಸಿದ್ದು, ನಂತರ ದಿನಾಂಕ 25-6-2005ರಂದು ರಾಜಕೀಯ ಒತ್ತಡ ಬಂದ ಮೇಲೆ ಸದರಿ ದೂರನ್ನು ಒಂದು ದಿನ ವಿಳಂಬ ಮಾಡಿ ಸ್ವೀಕರಿಸಿ ಕೇಸು ದಾಖಲು ಮಾಡಿರುತ್ತೀರಿ. ದಿನಾಂಕ 25-6-2005 ರಿಂದ 7-7-2005ರ ವರೆಗೆ ಸಿ.ಓ.ಡಿ. ತನಿಖೆಗೆ ವಹಿಸಿಕೊಳ್ಳುವ ತನಕ ನೀವು ಕೃತ್ಯ ನಡೆದ ಸ್ಥಳವಾದ ಮಲ್ಲಸಂದ್ರ ಗ್ರಾಮಕ್ಕೆ ಭೇಟಿ ನೀಡಿರುವುದಿಲ್ಲ ಹಾಗೂ ಲಭ್ಯವಿದ್ದ ನೇಣುವಿನ ಹಗ್ಗವನ್ನು ಜಪ್ತಿ ಮಾಡಿರುವುದಿಲ್ಲ. ಕೃತ್ಯ ನಡೆದ ಸ್ಥಳದಲ್ಲಿ ಲಭ್ಯವಿದ್ದ ನೇಣುವಿನ

ಹಗ್ಗವನ್ನು ಜಪ್ತಿ ಮಾಡಿರುವುದಿಲ್ಲ. ಮೃತಳ ರಕ್ತ ಸಂಬಂಧಿಕರ ಹಾಗೂ ಕೃತ್ಯ ನಡೆದ ಸ್ಥಳದ ಅಕ್ಕಪಕ್ಕದ ಸಾಕ್ಷಿಗಳನ್ನು ವಿಚಾರಣೆ ಮಾಡಿ ಹೇಳಿಕೆಗಳನ್ನು ಮಾಡಿಕೊಂಡಿರುವುದಿಲ್ಲ ಹಾಗೂ ಆರೋಪಿಯನ್ನು ಬಂಧಿಸಿರುವುದಿಲ್ಲ. ಕೃತ್ಯ ನಡೆದ ಸ್ಥಳ ಮಲ್ಲಸಂದ್ರ ಗ್ರಾಮ ವೇಮಗಲ್ ಪೊಲೀಸ್ ಠಾಣೆ ವ್ಯಾಪ್ತಿಗೆ ಸೇರಿರುತ್ತೆ ಎಂದು ಗುರ್ತಿಸಿ ಪ್ರಕರಣವನ್ನು ಕೂಡಲೇ ಸರಹದ್ದಿನ ಆಧಾರದ ಮೇರೆಗೆ ವರ್ಗಾವಣೆ ಮಾಡದೆ, ತಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ, ಕರ್ತವ್ಯ ಲೋಪ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

2.2 **ಶ್ರೀ ಕೇಶವ, ಆರಕ್ಷಕ ನಿರೀಕ್ಷಕರು, ನಂದಗುಡಿ ಪೊಲೀಸ್ ಠಾಣೆ** ಆದ ನೀವು ಹಿಂದೆ ಬಾಗೇಪಲ್ಲಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ನಿಮ್ಮ ವೃತ್ತ ವ್ಯಾಪ್ತಿಯ ಬಾಗೇಪಲ್ಲಿ ಪೊಲೀಸ್ ಠಾಣೆಯಲ್ಲಿ ದಿನಾಂಕ 25–06–2006 ರಂದು ಮೊ.ಸಂ.103:2005 ಕಲಂ 304(ಬಿ) ಐಪಿಸಿ ಮತ್ತು 3–4 ಡಿ.ಪಿ. ಕಾಯ್ದೆ ರೀತ್ಯಾ ದಾಖಲಾದ ಬಗ್ಗೆ ನೀವು ಪ್ರಕರಣದ ಪ್ರಥಮ ವರ್ತಮಾನದ ವರದಿಯನ್ನು ಪಡೆದ ಕೂಡಲೇ ದಿನಾಂಕ 25–06–2005 ರಿಂದ 7–7–2005 ರವರೆಗೆ ಇಂತಹ ಗಂಭೀರ ಸ್ವರೂಪದ ಪ್ರಕರಣದಲ್ಲಿ ತನಿಖೆ ಕೈಗೊಂಡು ಮೃತಳ ರಕ್ತ ಸಂಬಂಧಿಕರನ್ನು ಮತ್ತು ಇತರೆ ಸಾಕ್ಷಿಗಳನ್ನು ವಿಚಾರಣೆ ಮಾಡಿರುವುದಿಲ್ಲ. ಕೃತ್ಯ ನಡೆದ ಸ್ಥಳ ಮಲ್ಲಸಂದ್ರಕ್ಕೆ ಭೇಟಿ ನೀಡಿ ಪಂಚನಾಮೆ ಮಾಡಿರುವುದಿಲ್ಲ. ನೇಣುವಿಗೆ ಉಪಯೋಗಿಸಿದ ಹಗ್ಗವನ್ನು ಜಪ್ತಿ ಮಾಡಿರುವುದಿಲ್ಲ. ಕೃತ್ಯ ನಡೆದ ಸ್ಥಳವನ್ನು ಗುರ್ತಿಸಿ ಸರಹದ್ದಿನ ಆಧಾರದ ಮೇಲೆ ಪ್ರಕರಣವನ್ನು ವೇಮಗಲ್ ಠಾಣೆಗೆ ವರ್ಗಾವಣೆ ಮಾಡಲು ಕ್ರಮವನ್ನು ಕೈಗೊಂಡಿರುವುದಿಲ್ಲ. ಆರೋಪಿತನನ್ನು ಬಂಧಿಸಲು ತಾವೇ ಖುದ್ದಾಗಿ ಕ್ರಮವನ್ನು ಕೈಗೊಂಡಿರುವುದಿಲ್ಲ ಹಾಗೂ ಈ ಕೇಸಿನಲ್ಲಿ ಪಿ.ಎಸ್.ಐ. ರವರಿಗೆ ಸೂಕ್ತ ಮಾರ್ಗದರ್ಶನ ನೀಡದೆ, ತಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ, ಕರ್ತವ್ಯಲೋಪ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

2.3 **ಶ್ರೀ ಬಿ.ಪಿ.ಹೆರಾಜೆ, ಡಿ.ಎಸ್.ಪಿ., ಐಜಿಪಿ ರವರ ಕಛೇರಿ, ಪಶ್ಚಿಮ ವಲಯ, ಮಂಗಳೂರು** ಆದ ನೀವು ಚಿಕ್ಕಬಳ್ಳಾಪುರ ಪೊಲೀಸ್ ಉಪ ವಿಭಾಗಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾಗ, ದಿನಾಂಕ 25–06–2005ರಂದು ಈ ವರದಕ್ಷಿಣೆ ಸಾವಿನ ಪ್ರಕರಣದ ತನಿಖೆಯನ್ನು ಅಂದೇ ವಹಿಸಿಕೊಂಡಿದ್ದು, ದಿನಾಂಕ 7–7–2005 ರಂದು ಸಿ.ಓ.ಡಿ. ತನಿಖೆಗೆ ವಹಿಸಿಕೊಳ್ಳುವವರೆಗೆ ಕೃತ್ಯ ನಡೆದ ಸ್ಥಳ ಮಲ್ಲಸಂದ್ರ ಗ್ರಾಮಕ್ಕೆ ಭೇಟಿ ನೀಡಿರುವುದಿಲ್ಲ. ಸದರಿ ಕೃತ್ಯಸ್ಥಳದ ಪಂಚನಾಮೆ ಮಾಡಿರುವುದಿಲ್ಲ. ಕೃತ್ಯ ಸ್ಥಳದಲ್ಲಿದ್ದ ನೇಣುವಿಗೆ ಉಪಯೋಗಿಸಿದ ಹಗ್ಗವನ್ನು ಜಪ್ತಿ ಮಾಡಿರುವುದಿಲ್ಲ. ಮೃತಳ ರಕ್ತ ಸಂಬಂಧಿಕರ ಹಾಗೂ ಅಕ್ಕಪಕ್ಕದ ಮತ್ತು ಬಾಗಿಲು ಹೊಡೆದ ಸಾಕ್ಷಿಗಳ ಹೇಳಿಕೆಯನ್ನು ಪಡೆದುಕೊಂಡಿರುವುದಿಲ್ಲ. ಕೃತ್ಯ ನಡೆದ ಸ್ಥಳ ಮಲ್ಲಸಂದ್ರ ವೇಮಗಲ್ ಪೊಲೀಸ್ ಠಾಣೆಗೆ ಸೇರಿರುವುದೆಂದು ಗುರ್ತಿಸಿ ಸರಹದ್ದಿನ ಮೇಲೆ ಸಂಬಂಧಪಟ್ಟ ಠಾಣೆಗೆ ಮೊಕದ್ದಮೆಯನ್ನು ವರ್ಗಾಯಿಸಿರುವುದಿಲ್ಲ. ಪ್ರಕರಣದ ಆರೋಪಿತರನ್ನು ಬಂಧಿಸಲು ಯಾವುದೇ ಕ್ರಮಕೈಗೊಂಡಿರುವುದಿಲ್ಲ. ಈ ಬಗ್ಗೆ ಪಿ.ಎಸ್.ಐ. ಅಥವಾ ಸಿ.ಪಿ.ಐ. ರವರಿಗೆ ಮೇಲೆ ನಮೂದಿಸಿರುವಂತೆ ಕ್ರಮ ತೆಗೆದುಕೊಳ್ಳಲು ತನಿಖಾ ಸೂಚನೆಗಳನ್ನು ನೀಡದೆ, ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ, ಕರ್ತವ್ಯಲೋಪ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

ಈ ಪೊಲೀಸ್ ಅಧಿಕಾರಿಗಳ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮಗಳು, 1965–89ರ ನಿಯಮ 6 ಉಪ ನಿಯಮ (2) ಮತ್ತು 8ರ ಪ್ರಕಾರ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸುವಂತೆ ಹಾಗೂ ಶ್ರೀ ಬಿಜಯಕುಮಾರ್ ಸಿಂಗ್, ಐ.ಪಿ.ಎಸ್. ಪೊಲೀಸ್ ಅಧೀಕ್ಷಕರು ಸಿ.ಓ.ಡಿ ಬೆಂಗಳೂರು ಇವರನ್ನು ವಿಚಾರಣಾ ಅಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ಬೆಂಗಳೂರು ರವರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 15 ಪೊಸಿಪ 2007 ಬೆಂಗಳೂರು, ದಿನಾಂಕ:21.02.2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಬಿ.ಪಿ. ಹೆರಾಜೆ, ಡಿ.ಎಸ್.ಪಿ. ಶ್ರೀ ಕೇಶವ, ಸಿಪಿಐ ಶ್ರೀ ನಂಜುಂಡಪ್ಪ, ಪಿ.ಎಸ್.ಐ ಇವರ ವಿರುದ್ಧ ಕೆ.ಎಸ್.ಪಿ (ಡಿಪಿ) ನಿಯಮಗಳು 1965/89ರ ನಿಯಮ 6 ಉಪ ನಿಯಮ (2) ಮತ್ತು 8ರ ಪ್ರಕಾರ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿದೆ ಮತ್ತು ಈ ವಿಚಾರಣೆಯನ್ನು ನಡೆಸಲು ಶ್ರೀ ಬಿಜಯಕುಮಾರ್ ಸಿಂಗ್, ಐಪಿಎಸ್, ಎಸ್.ಪಿ. ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ನಿಯಮಾನುಸಾರ ಇಲಾಖಾ ವಿಚಾರಣೆ ನಡೆಸಿ ಮೂರು ತಿಂಗಳೊಳಗಾಗಿ ಅಂತಿಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 403

**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)